<u>ಕರ್ನಾಟಕ ವಿಧಾನ ಪರಿಷತ್ತು</u>

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1220

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಸಿ.ಎಂ. ಇಬ್ರಾಹಿಂ (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 07.03.2022

ಉತ್ತರಿಸುವ ಸಚಿವರು : ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಸರ್ಕಾರಿ/ಅರೆ ಸರ್ಕಾರಿ ನಿಗಮ ಮಂಡಳಿಗಳ ನೌಕರರು ಅಕ್ರಮವಾಗಿ ಬಿಪಿಎಲ್ ಕಾರ್ಡ್ ಪಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಪತ್ತೆಯಾದ ಪ್ರಕರಣಗಳೆಷ್ಟು; (ಸಂಪೂರ್ಣ ವಿವರ ಒದಗಿಸುವುದು) | ಬಂದಿರುತ್ತದೆ.<br>ರಾಜ್ಯದಲ್ಲಿ ಇಲ್ಲಿವರೆಗೆ 21,232 ಸರ್ಕಾರಿ/ಅರೆ ಸರ್ಕಾರಿ ನೌಕರರು ಅನಧಿಕೃತವಾಗಿ ಅಂತ್ಯೋದಯ ಅನ್ನ ಯೋಜನೆ ಮತ್ತು ಆದ್ಯತಾ ಪಡಿತರ ಚೀಟಿ ಪಡೆದಿರುವುದು ಪತ್ತೆ ಮಾಡಲಾಗಿದೆ.<br>(ಜಿಲ್ಲಾವಾರು ಮಾಹಿತಿಯನ್ನು ಅನುಬಂಧದಲ್ಲಿ ಒದಗಿಸಲಾಗಿದೆ.) |
| ಆ | ಈ ರೀತಿಯ ಪ್ರಕರಣಗಳಲ್ಲಿ ಎಷ್ಟು ಸರ್ಕಾರಿ ನೌಕರರ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು) | ಅನಧಿಕೃತವಾಗಿ ಅಂತ್ಯೋದಯ/ ಆದ್ಯತಾ ಪಡಿತರ ಚೀಟಿಯನ್ನು ಪಡೆದಿರುವ ಎಲ್ಲಾ ಸರ್ಕಾರಿ/ಅರೆ ಸರ್ಕಾರಿ ನೌಕರರಿಗೆ ಕಾರಣ ಕೇಳುವ ನೋಟಿಸ್‌ನ್ನು ಜಾರಿ ಮಾಡಲಾಗಿದೆ ಹಾಗೂ ಅಂತಹವರಿಂದ ದಂಡವನ್ನು ವಸೂಲಿ ಮಾಡುವುದರೊಂದಿಗೆ ಕಾನೂನು ಕ್ರಮವನ್ನು ಸಹ ಜರುಗಿಸಲಾಗುತ್ತಿದೆ |
| ಇ | ಅಕ್ರಮವಾಗಿ ಬಿಪಿಎಲ್ ಕಾರ್ಡ್ ಪಡೆಯುವುದನ್ನು ತಡೆಯಲು ಸರ್ಕಾರ ರೂಪಿಸಿರುವ ಮಾರ್ಗಸೂಚಿಗಳು ಯಾವುವು; | ಆದ್ಯತಾ ಪಡಿತರ ಚೀಟಿಗಳನ್ನು (ಬಿಪಿಎಲ್) ಪಡೆಯಲು ಈ ಕೆಳಕಂಡಂತೆ ಹೊರಗಿಡುವ ಮಾನದಂಡಗಳನ್ನು ರೂಪಿಸಲಾಗಿದೆ.<br>1. ಆದ್ಯತಾ ಪಡಿತರ ಚೀಟಿ ಪಡೆಯುವ ಬಗ್ಗೆ ಸರ್ಕಾರವು 2017 ರಿಂದ ಹೊರಗಿಡುವ ಮಾನದಂಡಗಳನ್ನು ರೂಪಿಸಿದೆ.<br>• ವೇತನವನ್ನು ಗಣನೆಗೆ ತೆಗೆದುಕೊಳ್ಳದೆ ಎಲ್ಲಾ ಖಾಯಂ ನೌಕರರು ಅಂದರೆ ಸರ್ಕಾರದ ಅಥವಾ ಸರ್ಕಾರದಿಂದ ಅನುದಾನವನ್ನು ಪಡೆಯುತ್ತಿರುವ ಸಂಸ್ಥೆಗಳು ಅಥವಾ ಸರ್ಕಾರಿ ಪ್ರಾಯೋಜಿತ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು/ಮಂಡಳಿಗಳು/ನಿಗಮಗಳು/ಸ್ವಾಯತ್ತ ಸಂಸ್ಥೆಗಳು ಇತ್ಯಾದಿ ಒಳಗೊಂಡಂತೆ ಆದಾಯ ತೆರಿಗೆ/ಸೇವಾ ತೆರಿಗೆ/ ವ್ಯಾಟ್/ವೃತ್ತಿ ತೆರಿಗೆ ಪಾವತಿಸುವ ಎಲ್ಲಾ ಕುಟುಂಬಗಳು. |

| | | |
|---|---|---|
| | | • ಗ್ರಾಮೀಣ ಪ್ರದೇಶಗಳಲ್ಲಿ 03 ಹೆಕ್ಟೇರ್ ಒಣಭೂಮಿ ಅಥವಾ ತತ್ಸಮಾನ ನೀರಾವರಿ ಭೂಮಿ ಹೊಂದಿರುವ ಕುಟುಂಬಗಳು ಅಥವಾ ಗ್ರಾಮೀಣ ಪ್ರದೇಶವನ್ನು ಹೊರತುಪಡಿಸಿ ನಗರ ಪ್ರದೇಶಗಳಲ್ಲಿ 1000 ಚದರ ಅಡಿಗಿಂತಲೂ ಹೆಚ್ಚಿನ ವಿಸ್ತೀರ್ಣದ ಪಕ್ಕಾ ಮನೆಯನ್ನು ಸ್ವಂತವಾಗಿ ಹೊಂದಿರುವ ಕುಟುಂಬಗಳು.<br>• ಜೀವನೋಪಾಯಕ್ಕಾಗಿ ಸ್ವತಃ ಓಡಿಸುವ ಒಂದು ವಾಣಿಜ್ಯ ವಾಹನವನ್ನು ಅಂದರೆ ಟ್ರ್ಯಾಕ್ಟರ್, ಮ್ಯಾಕ್ಸಿಕ್ಯಾಬ್, ಟ್ಯಾಕ್ಸಿ ಇತ್ಯಾದಿಗಳನ್ನು ಹೊಂದಿದ ಕುಟುಂಬವನ್ನು ಹೊರತುಪಡಿಸಿ ನಾಲ್ಕು ಚಕ್ರದ ವಾಹನಗಳನ್ನು ಹೊಂದಿರುವ ಎಲ್ಲಾ ಕುಟುಂಬಗಳು.<br>• ಕುಟುಂಬದ ವಾರ್ಷಿಕ ಆದಾಯವು ರೂ. 1.20 ಲಕ್ಷಗಳಿಗಿಂತಲೂ ಹೆಚ್ಚು ಇರುವ ಕುಟುಂಬಗಳು.<br>ಈ ಮೇಲ್ಕಂಡ ಸೌಲಭ್ಯಗಳನ್ನು ಹೊಂದಿರುವ ಆದ್ಯತಾ ಪಡಿತರ ಚೀಟಿಯನ್ನು ಪಡೆಯಲು ಅರ್ಹರಿರುವುದಿಲ್ಲ. |

ಆನಾಸ 46 ಡಿಆರ್‌ಎ 2022 (ಇ-ಆಫೀಸ್)

(ಉಮೇಶ ವಿ. ಕತ್ತಿ)

ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

# ಅನಧಿಕೃತವಾಗಿ ಸರ್ಕಾರಿ ನೌಕರರು ಪಡೆದಿರುವ ಅಂತ್ಯೋದಯ ಅನ್ನ ಮತ್ತು ಆದ್ಯತಾ ಪಡಿತರ ಚೀಟಿಗಳ ವಿವರ

| ಕ್ರ. ಸಂ | ಜಿಲ್ಲೆಗಳು | ಅಂತ್ಯೋದಯ ಅನ್ನ | ಆದ್ಯತಾ | ಒಟ್ಟು |
|---|---|---|---|---|
| 1 | BAGALKOTE | 112 | 683 | 795 |
| 2 | BALLARI | 126 | 698 | 824 |
| 3 | BANGALORE EAST | 3 | 71 | 74 |
| 4 | BANGALORE NORTH | 4 | 114 | 118 |
| 5 | BANGALORE SOUTH | 6 | 218 | 224 |
| 6 | BANGALORE WEST | 12 | 389 | 401 |
| 7 | BELAGAVI | 147 | 1203 | 1350 |
| 8 | BENGALURU | 51 | 986 | 1037 |
| 9 | BENGALURU RURAL | 46 | 500 | 546 |
| 10 | BIDAR | 85 | 498 | 583 |
| 11 | CHAMARAJANAGARA | 98 | 464 | 562 |
| 12 | CHIKKABALLAPURA | 53 | 431 | 484 |
| 13 | CHIKKAMAGALURU | 58 | 492 | 550 |
| 14 | CHITRADURGA | 57 | 502 | 559 |
| 15 | DAKSHINA KANNADA | 30 | 123 | 153 |
| 16 | DAVANAGERE | 90 | 481 | 571 |
| 17 | DHARWAR | 27 | 297 | 324 |
| 18 | GADAG | 51 | 239 | 290 |
| 19 | HASSAN | 59 | 878 | 937 |
| 20 | HAVERI | 85 | 347 | 432 |
| 21 | KALABURAGI | 178 | 1013 | 1191 |
| 22 | KODAGU | 22 | 140 | 162 |
| 23 | KOLAR | 77 | 601 | 678 |
| 24 | KOPPAL | 150 | 526 | 676 |
| 25 | MANDYA | 80 | 826 | 906 |
| 26 | MYSURU | 173 | 1284 | 1457 |
| 27 | RAICHUR | 175 | 930 | 1105 |
| 28 | RAMANAGARA | 52 | 501 | 553 |
| 29 | SHIVAMOGGA | 58 | 477 | 535 |
| 30 | TUMAKURU | 108 | 1152 | 1260 |
| 31 | UDUPI | 51 | 171 | 222 |
| 32 | UTTARA KANNADA | 13 | 215 | 228 |
| ~~33~~ | ~~VIJAYAPURA~~ | ~~125~~ | ~~792~~ | ~~917~~ |
| 34 | YADGIR | 81 | 447 | 528 |
| | ಒಟ್ಟು | 2543 | 18689 | 21232 |

Joint Director